136

# ವೈರಾಗ್ಯನಿಧಿ

[ತರಂಗರೂಪಕ]

ರಚಯಿತರು:

ಶ್ರೀ| ಕೆ. ಎಸ್. ಶರ್ಮ,

ವಾಣೀಮಂದಿರ, ಕಾಸರಗೋಡು.

1957.

ಒಂದಾಣೆ




ಮಾಲೆ

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯ ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1957ನೇ ಮೇ ತಿಂಗಳ ಎರಡನೆಯ ವಾರದ ವರೆಗೆ 136 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

136 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 2362 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ವೈರಾಗ್ಯನಿಧಿ

[ತರಂಗರೂಪಕ]

........

## ಪಾತ್ರ ಪರಿಚಯ

**ಬುದ್ಧ:**—ಸಂಸಾರದಲ್ಲಿ ವಿರಕ್ತಿಯನ್ನು ತಾಳಿ, ಸತ್ಯಪೂರ್ಣವಾದ ಶಾಶ್ವತ ಶಾಂತಿಪದವನ್ನರಸಲು ಹೊರಟ ಮಹಾಮಹಿಮ.

**ಆನಂದ:**—ಬುದ್ಧನ ಪ್ರೀತಿಯ ಅಂತೇವಾಸಿ.

**ಸಿದ್ಧಾರ್ಥ:**—ಶುದ್ಧೋಧನ ಮಹಾರಾಜನ ಏಕಮಾತ್ರ ಪುತ್ರ.

**ಚೆನ್ನ:**—ರಾಜಕುಮಾರ ಸಿದ್ಧಾರ್ಥನ ಪ್ರೀತಿಯ ರಥಿಕ. ಸ್ವಾಮಿಭಕ್ತಿಯಲ್ಲಿ ಅಪ್ರತಿಮ.

**ಸಂಸಾರ-ವಿರಕ್ತಿ:**—ಅದೃಶ್ಯ ಪಾತ್ರಗಳು.

**ಉಳಿದವರು:**—ಶಿಷ್ಯರು, ಪೌರರು,—ಇತ್ಯಾದಿ.



## ದೃಶ್ಯ ೧

**ನಾಂದಿ**

ಬುದ್ಧಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ
ಧರ್ಮಂ ಶರಣಂ ಗಚ್ಛಾಮಿ

(ನಾಂದಿಯ ಕೊನೆಯಲ್ಲಿ, ದೂರದಿಂದಲೆ ತೇಲಿಬರುತ್ತಲಿದ್ದ ಅವ್ಯಕ್ತ ನಾದವೊಂದು ಕೇಳಿಸುತ್ತ ಹಾಗೆಯೆ ಮೌನದಲ್ಲಿ ಸೆರೆಗೊಳ್ಳುವುದು.)

ನಿರೂಪಕ: ಸುಮಾರು ಎರಡೂವರೆ ಸಾವಿರ ವರ್ಷಗಳ ಹಿಂದಿನ ಪುಣ್ಯದಿನ. ಅಂದು ಕುಶಿನಾರದ ಶಾಲ್ಯವನದಲ್ಲಿ ನಿರ್ಯಾಣನಿವೇಶವನ್ನು ಸ್ವಾಗತಿಸಿದ್ದ ಮಹಾತ್ಮಾ ಬುದ್ಧನು, ಲೋಕೋತ್ತರ ಸಂದೇಶಕ್ಕಾಗಿ ಮನ ನೀಡಿದ್ದ–ಅದೇ ವೇಳೆ........

ಬುದ್ಧ: ಆನಂದ! ಆನಂದ!! ಆನಂದಾ........

ಆನಂದ: ಗುರುದೇವ, ಗುರುದೇವ, ಆಜ್ಞೆಯೇನು?

ಬುದ್ಧ: ಆನಂದ, ಬಳಿಯೆ ಬಾ! ನನ್ನ ಹೃದಯವರ್ತಿಗೆ ತೈಲವೂಡುವಂತೆ ಸಮೀಪಕ್ಕೆ ಬಾ! ಇಂದಿನ ದಿನ ನಿನಗಾಗಿ ಮೀಸಲಿದೆ. ನನ್ನ ರಕ್ತದ ಕಣಕಣವೂ ನಿನಗಾಗಿ ಹಾರಯಿಸುತ್ತಿದೆ! 'ಲೋಕಶಾಂತಿ'ಯ ಮಹಾಮಂತ್ರವು ನನ್ನೆದೆಯಿಂದ ಚಿಮ್ಮಿ, ನಿನ್ನೆದೆಯೊಲವನ್ನು ಬಯಸುತ್ತಿದೆ. ಈ ಪಿಪಾಸೆಗೆ ನೀನೇ ಆಸರೆ!

ಆನಂದ: ಗುರುದೇವ, ನನಗೆ ಅರ್ಥವಾಗಲಾರದು. ಕಳಕಳಿಯು ಹೃದಯವನ್ನು ಹಿಸುಕುತ್ತಿದೆ! ತಮ್ಮ ಇಂದಿನ ಆಯಾಸ, ಶಾಂತಿಪೂರ್ಣ ನಯನಗಳ ನಿಶ್ಚಳ ವಿಲೋಕನ, ಹೃದಯದಿಂದ ಹೊಮ್ಮುತ್ತಿರುವ ಅಮೃತವಾಣಿಯ ಮುಂಬೆಳಗು! ಇನ್ನೂ ತುಂಬದ, ತುಂಬಲಾಸೆಯುಳ್ಳ, ಈ ಹೃದಯವು ಪ್ರಕ್ಷುಬ್ಧ ಜಲಧಿಯಂತೆ ಮೊರೆದಾಡುತ್ತಿದೆ. ನನ್ನೊಡೆಯಾ! ನನ್ನ ಜೀವನಾದದ,—ಶಕ್ತಿಸ್ವರೂಪ ಗುರುದೇವ, ಮಣಿದಿರುವೆ—ನನಗಾಗಿ ಆಜ್ಞಾಪಿಸಿರಿ!

ಬುದ್ಧ: ಕಂದಾ! ನಿನ್ನೆಯ ದಿನವನ್ನು ಜ್ಞಾಪಿಸುವೆಯಾ? ಭಕ್ತವರ-ಚಂದನಿತ್ತ ಭಿಕ್ಷೆಯ ಅಮೃತಾನ್ನವನ್ನು ನೆನವರಿಸು! ನನ್ನ ಅಸ್ವಾಸ್ಥ್ಯದ ಮುಂದೆ ನೀನು ತಡೆದರೂ ಭಕ್ತಹೃದಯದ ತೃಪ್ತಿಗಾಗಿ ನನ್ನ ಕೊನೆಯೂಟವನ್ನುಂಡೆನು. ಈ ಕೊನೆಯೂಟದಲ್ಲೇ ನನಗೆ ತೃಪ್ತಿಯಿದೆ! ಆ ತೃಪ್ತಿಯಲ್ಲೇ ಮುಕ್ತಿಯ ಪೂರ್ಣತೆಯಿದೆ! ಕಂದಾ, ಇನ್ನಷ್ಟು ಬಳಿಸಾರು!

ಆನಂದ: ಗುರುದೇವ, ನನ್ನ ಹೃದಯವು ನಡುಗುತ್ತಿದೆ. ನಾಲಗೆ ತಡವರಿಸುತ್ತಿದೆ! ತಾವು 'ಕೊನೆಯೂಟ'ವೆಂದು ನನ್ನನ್ನು ಎದೆಗುಂದಿಸಬೇಡಿರಿ! ನನ್ನ ದೇವರೇ, ನನಗಾಗಿ ತಾವು ಹಾಗೆನ್ನಬಾರದು!

ಬುದ್ಧ: ಕುವರ, ಈ ವಿನೋದನೆಯಲ್ಲಿ ನೀನೇಕೆ ಕುದಿಯುತ್ತಿರುವೆ? ಇದು ಚಿರಂತನ ವಸ್ತುವಲ್ಲ! "ಇಂದು ಕೆಲವು ನಾಳೆಗಳೊಡನೆ" ಮುಳುಗುವುದು ಸ್ವಾಭಾವಿಕವಿದೆ. ನಾಳೆಯ ದಿನಕ್ಕಾಗಿ ಹಂಬಲವೇಕೆ? ಇಂದನ್ನು ಶುಭ್ರತೆಯಲ್ಲಿ ಬೆಳಗಬೇಕು! ಇದನ್ನು ಮರೆತು ಈ ದೇಹಕ್ಕಾಗಿ ಮರುಕವೆ?

ಆನಂದ: ಗುರುದೇವ, ಬರಿಯ ದೇಹದ ಮಮಕಾರವಲ್ಲವಿದು! ಸಾಧನಾಪೂರ್ಣ, ಅಹಿಂಸಾ-ಸತ್ಯ-ತತ್ತ್ವಪೂರ್ಣವಾದ ತಮ್ಮ ದಿವ್ಯದರ್ಶ

ನದ ಭಾಗ್ಯದಲ್ಲಿ ಶಾಂತಿಯುಂಡ ಈ ಬಡಮನದ ಹಾರೈಕೆಯಿದು. ಸರ್ವ ಭೂತ ಹಿತಾತ್ಮಕವಾಗಿ ಬಯಸುತ್ತಿರುವ ಸ್ವಾರ್ಥವಿದು! ಬರಿಯ ದೇಹಕ್ಕಾಗಿ ಕೊರಗುವುದಿಲ್ಲ. ಈ ದುಃಖವನ್ನು ತಡೆಯಲಾರೆ! ನಾನೇನು ಮಾಡಲಿ?

ಬುದ್ಧ: (ನಗುವಿನಲ್ಲಿ) ನನ್ನ ಮುದ್ದು ಕುವರ, (ಮೈದಡವುತ್ತ) "ಮೋಡಬಿಟ್ಟ ಚಂದ್ರನಂತೆ—ಮೊದಲು ಮೈಮರೆತಿದ್ದು ಆ ಮೇಲೆ ಎಚ್ಚತ್ತ ಮನುಷ್ಯ ಲೋಕವನ್ನೆಲ್ಲ ಬೆಳಗುವನು"—ಈ ಮಾತನ್ನು ನೆನೆಯು; ತಾತ್ಕಾಲಿಕವಾಗಿ ನೆಲೆಗೊಂಡ ಈ ಮಾಯೆಯನ್ನು ದೂರ ಸರಿಸು! ಹೃದಯದಲ್ಲಿ ಸತ್ಯವನ್ನು ನೆಲೆಗೊಳಿಸು! ಬರಿಯ ಈ ದೇಹದ ಅಗಲಿಕೆಗಾಗಿ ಮರುಕವೇರಬೇಡ!

ಆನಂದ: ಗುರುವರ್ಯಾ, ಅಗಲಿಕೆ ಅಗಲಿಕೆ........

(ದುಃಖಸೂಚಕನಾದ)

ಬುದ್ಧ: ನೋಯುತ್ತಿರುವೆಯಾ? ಅಯ್ಯೋ, ಅದೇಕೆ ಕಣ್ಣೀರು? ಯಾಕಾಗಿ ಕಣ್ಣೀರು? ಯಾರಿಗಾಗಿ ಕಣ್ಣೀರು? ನಶ್ವರವಾದೀ ದೇಹದ ಮುಂದೆ ನನ್ನ ಶಿಷ್ಯನಾದ ಆನಂದ ಕಣ್ಣೀರು ಮಿಡಿಯಬಾರದು! ಕಣ್ಣೀರಿಂದಿದು ವಿಮುಕ್ತವಾಗದು. ನಾನು ಬಲ್ಲೆ! ಈ ವಿಮೋಚನೆಯಲ್ಲಿ ನನ್ನ ಧರ್ಮಪ್ರವಾಹ ನಿನ್ನೆಡೆಗೆ ಓಡುತ್ತಿದೆ! ಆನಂದದಿಂದ— ಪೂರ್ಣ ಸತ್ಯದಿಂದ ತುಂಬಿಕೊ! ಇದರ ಮುಂದೆ ಈ ಅಗಲಿಕೆ ಅಲ್ಪ—ಬಹು ಸ್ವಲ್ಪ!

ಆನಂದ: ಆದರೂ ಈ ಘೋರವಾದ—ನನ್ನೆದೆಯನ್ನು ಸೀಳುವಂತಾಗಿಸುವ—ಅಗಲಿಕೆಯನ್ನು ಹೇಗೆ ಸಹಿಸಬಲ್ಲೆ!

ಬುದ್ಧ: ಸತ್ಯವನೇ ಆಡಿದೆ! ಆನಂದ, ಅಂದು— ಅರುವತ್ತು ವರುಷಗಳ ಗತಕಾಲದ— ಇಂದಿನ ಭಾಗ್ಯನಿಧಿಯನ್ನು ಸಮರ್ಪಿಸಿದ— ಅಗಲಿಕೆಯನ್ನು ಪರಿಭವಿಸು! ನನ್ನ ಮುಂದೆ ಕಾದಿದ್ದ ಘೋರ ಸಮಸ್ಯೆಗಳ ತಾಕಲಾಟದಿಂದ ಭುಗಿಲೆದ್ದು—ಕಾಡಿ ಒಡೆದು ಚೂರಾಗಿ ಹೋದ ಅಗಲಿಕೆಯನ್ನು ನೆನವರಿಸು ಕಂದ! ನಿನ್ನ ದುಃಖವನ್ನು—ವಿಕ್ಷಿಪ್ತಮನೋಭಾವವನ್ನು ಕೆರಳಿಸದೆ—ಕದಡಿಸದೆ ಮೌನವಾಗಿ ಯೋಚಿಸು! ಅಮೃತಬಿಂದುಗಳ ಅನಸ್ಯೂತಧಾರೆಯು ನಿನ್ನ ಹೃದಯಪಾತ್ರೆಯಲ್ಲಿ ಅಡಿಯಿಡಲು ಕಾಯುತ್ತಿದೆ. ಭೂತಾಕಾಶದಲ್ಲಿ ಅಡಿಯಿರಿಸಿ ನೋಡು. ಹೃದಯಕ್ಕೊಂದು ದೃಢತೆಯನ್ನು ಬಲಿಯು!

ಆನಂದ: ಗುರುದೇವ, ಆ ಮಹಾರಾತ್ರಿ! ವಿಶ್ವವೇ ಬೆಳಗಿದ ಮಹಾ ರಾತ್ರಿ! ಅಲ್ಲಿ ನೆಲೆಗೊಂಡು ನಿಂತ ಆ ಅಗಲಿಕೆ! ಅಸಹ್ಯ—ದುರ್ಭೇದ್ಯ ವಿರಕ್ತಿ........

ನಿರೂಪಕ: "ಹೌದು, ಆ ಮಹಾರಾತ್ರಿಯಲ್ಲಿ ಕಪಿಲವಸ್ತುವಿನಲ್ಲಿ ಬೆಳಕುಕಂಡ ಶಾಂತಿಯ ಹೊಂಬೆಳಕಿಗೆ ನಿದಾನವಾದ ಅಗಲಿಕೆಯ— ಪೂರ್ವಭಾವಿಯಾಗಿ ನೆಲೆಗೊಂಡ ಪಟ್ಟಣದ ಪೂರ್ಣ ಶೃಂಗಾರ! ಆ ಸೊಗಸು! ಆ ಮಹೋತ್ಸವದಲ್ಲಿ

(ಉತ್ಸಾಹಸೂಚಕ ವಾದ್ಯರವ)

ಸಿದ್ಧಾರ್ಥ.

ರಾಗ–ತಿಲಂಗ್ ಬಹಾರ್, ತಾಳ–ದಾದರಾ.

ಮೋದಪುರಕೀಗ ಯಾನ ‖ ಮೋದ ‖
ಆಲಿಸಿ ಮುಂದು, ನೋಡಲ ಚೆನ್ನ ‖
ತೆರಳೈ ಮುದದಿಂದ ‖
ಮೋದವದೀ ಕಾಲ ಸುಶಾಂತಾ ‖ ಮೋದ ‖

ಮೋದ-ಮೋದ ಓ ದಿನವೂ
ನಲಿದು ಕುಣಿದು ತಣಿದು ನಾನು
ಅತಿಜವದೀ ಮುದದೀ ತೆರಳಿ
ಸುಖವನೇರಿ ಮನದೆ ಹಾಡಿ ‖ ಮೋದ ‖

ಸಿದ್ಧಾರ್ಥ: ಚೆನ್ನ, ಆದೆಷ್ಟು ಮನೋಹರವಾದ ಪ್ರದೇಶಕ್ಕೆ ನನ್ನ ನ್ನೊಯ್ಯುತ್ತಿರುವೆ! ಅಮರಲೋಕದ ವೈಭವವನ್ನು ಓದಿದ ಮನವು, ಇಂದೀ ಸೊಗಸಿನ ನೋಟದಿಂದ ಕೆದರಿ ಮಿರುಗೇರುತ್ತಿದೆ! ಇನ್ನೀರಥವು ಯಾವೆಡೆಗೆ ತೆರಳುತ್ತದೆ?

("ರಾಜಕುಮಾರನಿಗೆ ಜಯವಾಗಲಿ" ಎಂಬ ಹರ್ಷೋದ್ಗಾರವು ತುಂಬುವುದು.)

ಚೆನ್ನ: ಒಡೆಯಾ, ಈ ಜಯನಾದದ ಮಂಜುಲ ತರಂಗಿಣಿಯಲ್ಲೀ ತೇಲಾಡುತ್ತಿರುವ ನಾವು, ಇದೀಗ ಪುರೋದ್ಯಾನವನ್ನು ದಾಟಿ ನಗರದ ಮಧ್ಯಕ್ಕೆ ಬಂದಿರುವೆವು. ಭವ್ಯವಾದೀ ನೋಟವನ್ನು ಸವಿದು, ಇದೇ ಕಾಣುವ ಉತ್ತರಪಾರ್ಶ್ವದಿಂದ ಅರಮನೆಯನ್ನು ಸೇರುವೆವು.

ಸಿದ್ಧಾರ್ಥ: ಚೆನ್ನ, ಕಂಥಕನಿಗೆ ಆಯಾಸವಾಗುವುದಾದರೆ, ಇಲ್ಲಿಂದಲೆ ಹಿಂತಿರುಗೋಣ! ಕಂಥಕ, ಕಂಥಕ—ಬಳಲಿದೆಯಾ?

ಚೆನ್ನ: ಕಂಥಕನಿಗೆ ಬಳಲಿಕೆಯ ಗೊಡವೆಯೇ ಇಲ್ಲ. ಚೆಲುವಿನ, ಬೆಡಗಿನ ನಗರದ ಮಧ್ಯದಲ್ಲಿ ಒಡೆಯನನ್ನು—ಒಡೆಯನ ಹೃದಯವನ್ನು—ಆನಂದದಲ್ಲಿ ತುಂಬಿ ಮೆರೆದಾಡುವ ಬಯಕೆಯಲ್ಲೇ ಮುಂದಡಿಯಿಟ್ಟು ನೆಗೆಯುತ್ತಿರುವನು.

ಸಿದ್ಧಾರ್ಥ: ಆಹಾ! ನನ್ನ ದೇಹಕ್ಕೊಪ್ಪಿದ ಚೆನ್ನ! ಚೆನ್ನನ ಇಂಗಿತವನ್ನರಿತು ನೆಗೆದಾಡಿ ಸ್ವಾಮಿಸೇವೆಯನ್ನು ಸಲ್ಲಿಸುವ ನನ್ನ ಅಶ್ವರಾಜ ಕಂಥಕ! ಇದರ ಪ್ರೀತಿಗಾಸರೆ ಈ ನನ್ನ ಬಾಳು! ಆಹಾ, ಏನು ಸುಖಮಯವೀ ಜೀವನ! ಇದಕ್ಕಿಂತ ಮಿಗಿಲಾದ ಭಾಗ್ಯ ಇನ್ನೊಂದಿಲ್ಲ! ಅದಿದ್ದರೆ........

(ಒಂದು ತಳಮಳ ಸೂಚಕ ಶಬ್ದ. ಅದರೆಡೆಯಲ್ಲೇ "ಧರ್ಮಮಾಡಿ" ಎಂಬ ಕೂಗು. "ಅತ್ತ ತೊಲಗು ಮುದಿಗೂಬೆ" ಎಂಬ ಕಡೆಮಾತು.)

ಸಿದ್ಧಾರ್ಥ: ಚೆನ್ನ! ಚೆನ್ನ! ಅದೇನು ಕಾಣಬರುತ್ತಿರುವುದು? ಮನುಷ್ಯಾಕೃತಿಯೇ? ಎಲುಬಿನ ಹಂದರವೊಂದು ಜನಸಂದಣಿಯಿಂದ ನುಸುಳಿ ಏನನ್ನೋ ಕೈಯೆತ್ತಿ ಯಾಚಿಸುತ್ತಿದೆಯಲ್ಲಾ? ನಾನೇನು ಮಾಡಲಿ! ಚೆನ್ನ—ಹೇಳು, ಹೇಳು, ಅದೇನೆಂದು ಹೇಳು........

ಭಿಕ್ಷುಕ: ಧರ್ಮದೇವರೆ, ದಯೆ ನೀಡಿ! ಸಾಯುವುದರಲ್ಲಿರುವೆ! ಉಳಿಸಿರಿ! ಅಯ್ಯೋ, ಧರ್ಮ!

ಸಿದ್ಧಾರ್ಥ: ಚೆನ್ನ, ಬೇಗ ಹೇಳು. ಹೃದಯವೇಕೋ ಅತ್ತೆಡೆಗೆ ತೇಲಿ ಸಾಗುತ್ತಿದೆ!

ಚೆನ್ನ: ಒಡೆಯಾ, ಇದು "ಇಂದಿನೊಡನೆ ಹೊಂದಿಕೆಯಾಗಿ ನಿತ್ಯ ಹಲವಾರು ನಿನ್ನೆಗಳ ಕಂತೆ!" ಕೆಲವು ವರ್ಷಗಳ ಹಿಂದೆ ಸುಂದರವಾದ ಮೈಕಟ್ಟಿನಿಂದ ಶೋಭಿಸುತ್ತಿದ್ದ ದೇಹ. ಇಂದು ಗೂನುಬೆನ್ನಿನೊಡನೆ ಕಣ್ಣಿನ ಹೊಳಪನ್ನು ಕಳೆದುಕೊಂಡಿದೆ. ಇವನ ಜೀವನದೀಪದ ಎಣ್ಣೆ ತೀರಿದೆ, ಬತ್ತಿ ಉರಿದು ಮುಗಿದಿದೆ; ಕೊನೆಯ ಕಿಡಿ ಮಾತ್ರ ನಿಮಿಷವನ್ನು ಕಾಡುತ್ತಿದೆ—ವಂಚನೆಯಿಲ್ಲದೆ ಹೇಳಿದೆ ನನ್ನೊಡೆಯಾ! ಇದೇ ಈ ಸುಖರಾಶಿಯಲ್ಲಿ ಅಡಕವಾಗಿದ್ದ ದುಃಖಬಿಂದುಗಳ ಧಾರೆ!

ಸಿದ್ಧಾರ್ಥ: ಚೆನ್ನಾ, ಏನೆಂದೆ? ಈ ಮುಪ್ಪು ಸರ್ವರಿಗೂ ಅನ್ವಯಿಸುವುದೇ?—ಅಲ್ಲ........

ಚೆನ್ನ: ದಿನಗಳನ್ನು ವರ್ಷಗಳ ಕೂಡಿಕೆಯಲ್ಲಿ ಸವೆಯಿಸುತ್ತಿರುವ ಯಾರನ್ನೂ ಈ ಅವಸ್ಥೆ ಬಿಡಲಾರದು! ಮುಪ್ಪಿಗೆ ಸರ್ವರೂ ಮೀಸಲು.

ಸಿದ್ಧಾರ್ಥ: ಚೆನ್ನ, ಹಾಗಾದರೆ ನಾನಷ್ಟು ವರ್ಷ ಬದುಕಿದರೆ, ನನ್ನ ಪ್ರಿಯತಮೆಗೆ ಅಷ್ಟು ವಯಸ್ಸಾದರೆ.........ಹೀಗಾಗುವೆವೆ?

ಚೆನ್ನ: ಒಡೆಯಾ, ಇಷ್ಟು ವರ್ಷಗಳ ದೀರ್ಘಾವಧಿಯಲ್ಲಿ ಬಾಳುವವನು ಈ ಮುಪ್ಪಿನಿಂದ ಬಿಡುಗಡೆಯನ್ನೈದಲು ಸಾಧ್ಯವೇ ಇಲ್ಲ.

ಸಿದ್ಧಾರ್ಥ: ಅಯ್ಯೋ, ಎಂತಹ ವಿಚಿತ್ರವಿದು? ಏನು ಘೋರಾವಸ್ಥೆಯಿದು! ಇದರ ಮುಂದೆ ಮಾನವನು............ಚೆನ್ನ, ಮುಂದುವರಿ! ತಡೆಯಲಾರೆ!

("ಅಯ್ಯೋ!" ಎಂಬ ಆರ್ತನಾದ ಕೇಳಿಸುವುದು. ಹಿನ್ನೆಲೆಯ ವಾದ್ಯ ಸಂಗೀತ ಬಿರುಸಾಗುವುದು.)

ಸಿದ್ಧಾರ್ಥ: ಚೆನ್ನ, ಚೆನ್ನ—ಅದೇನು ನೋಡು! ಅದೋ, ಆ ಮಾರ್ಗದ ಬದಿಯಿಂದ ಉರುಳಿ ನರಳುತ್ತಿರುವುದೇನು? ಅಯ್ಯೋ, ವಾಸನೆಯೇನು ಚೆನ್ನ? ತಡೆಯಲಾರೆ—

ಚೆನ್ನ: ಒಡೆಯ, ಅತ್ತ ಕಡೆಯ ನೋಟವನ್ನು ಹಿಂತಿರುಗಿಸಿರಿ. ಇದೋ ರಥವನೀಗಲೆ ಬಲಬದಿಗೆ ತಿರುಗಿಸುವೆನು. ಮನೋಜ್ಞವಾದ ರಾಜವೃಂದಾವನದೆಡೆ ಸಾಗುವಾ!

ಸಿದ್ಧಾರ್ಥ: ಬೇಡ, ಬೇಡ! ನನ್ನ ಹೃದಯವನ್ನಾವುದೋ ಒಂದು ವೇದನೆಯು—ಎಂದೂ ಕಂಡರಿಯದ ಮಿಡುಕು ಮೀಟುತ್ತಿದೆ. ನನ್ನರಿವಿಗಿದನು ನಿಲುಕಿಸು ಚೆನ್ನಾ! ನನಗಾಗಿ ನೀನಿರುವವನು. ನನ್ನ ಹೃದಯವನ್ನು ತಳ್ಳಿ ಮುಂದುವರಿಯದಿರು.

ಚೆನ್ನ: ನನ್ನೊಡೆಯಾ, ನಾನೇನುತ್ತರಿಸಲಿ! ನನ್ನ ನಾಲಗೆಯೆ ತಡವರಿಸುತ್ತಿದೆ.

ಸಿದ್ಧಾರ್ಥ: ಆದರೂ—ನನಗಾಗಿ, ನನ್ನ ಹೃದಯತೃಪ್ತಿಗಾಗಿ ಉಸುರಿಬಿಡು.

ಚೆನ್ನ: ಒಡೆಯಾ, ಕಣ್ಣೀರ ಕೋಡಿಯಲ್ಲಿ ರಕ್ತದ ಧಾರೆಯನ್ನು ಚೆಲ್ಲುತ್ತಿರುವ ಈ ಮನುಷ್ಯ, ಕುಷ್ಠರೋಗವೆಂಬ ಭೀಕರ ಆಪತ್ತಿನಲ್ಲಿ ದೇಹವನ್ನು ಮಣ್ಣಿನೆಡೆಗೆ ಸಾಗಿಸುತ್ತಿದ್ದಾನೆ! ಈ ರೋಗ ಸಿಡಿಲಿನಂತೆ ಯಾರ

ಮೇಲೂ ಎರಗಬಲ್ಲುದು—ಗಾಳಿಯಂತೆ ಯಾರ ಮೇಲೂ ಬೀಸಬಲ್ಲುದು! ಸಹಿಸಲಾರದ ಭೀಕರ ರೋಗವಿದು! ನೆನೆದರೆ ಮೈ ನಡುಗುವ ರುದ್ರದೃಶ್ಯ ವಿದು........ರಥವನ್ನು ಹಿಂತಿರುಗಿಸಲೇ........? (ನೋಡಿ) ಅಯ್ಯೊ, ನನ್ನೊಡೆಯಾ? ಇದೇನು? ಇದೇಕೆ ತಲೆಬಗ್ಗಿಸಿ ಮೌನದಿಂದಿರುವಿರಿ? ಅಕಟ, ಕಣ್ಣಂಚಿನಲ್ಲಿ ಹನಿಗೂಡುವ ಈ ನನ್ನ ಒಡೆಯನನ್ನು—ನನ್ನ ದೇವರನ್ನು—ನಾನೆಂತು ಕಾಣಲಿ? ನನ್ನೊಡೆಯಾ, ನನ್ನ ದೇವರೆ—ದುಃಖಿಕ್ಕೀಡಾಗದಿರಿ. ಕಣ್ಣೀರ ಧಾರೆಗೆ ಕಪೋಲವನ್ನು ಗುರಿಯಾಗಿಸದಿರಿ! ಈ ಪಾಪಿಯನ್ನು—ಒಡೆಯನ ಕಣ್ಣೀರನ್ನು ಹನಿಸಿದ ಪಾಪಿಯನ್ನು—ಮನ್ನಿಸಿರಿ.

ಸಿದ್ಧಾರ್ಥ: (ತಲೆಯೆತ್ತಿ) ಚೆನ್ನಾ, ನೀನು ಪಾಪಿಯಲ್ಲ! ನಾನು ತಿಳಿಯಬೇಕಾದುದನ್ನು ಬೋಧಿಸಿದೆ. ಈ ಘೋರ ಸಂಸಾರದ ಬಯಲಾಶೆಯನ್ನು ನೆಚ್ಚಿದ ಮಾನವರೆಲ್ಲರೂ ಪಾಪಿಗಳೆಂಬರಿವಾದಾಗ, ನೀನೊಬ್ಬನೇ ಪಾಪಿಯಾಗಲಾರೆ. ಗೆಳೆಯಾ! ಇನ್ನಿಲ್ಲಿ ತಡೆಯಬೇಡ ಚೆನ್ನಾ! ನನ್ನ ಕಂಥಕನೂ ಈ ನೋವಿನಿಂದ ಬಳಲಿರಬಹುದು! ನೀನೂ ಬಹಳ ಬಳಲಿರುವೆ! ತಿರುಗಿಸು ರಥವನ್ನು........

ಚೆನ್ನ: ಆಗಲಿ ಮಹಾಪ್ರಭೋ! ಕಂಥಕ, ಒಡೆಯನ ಹಿತದಂತೆ ವರ್ತಿಸು; ಇದೇ ಪುರೋದ್ಯಾನದ ಉತ್ತರಪಾರ್ಶ್ವದಿಂದ ತೆರಳೋಣ.

ನಿರೂಪಕ: ರಾಜಕುಮಾರನ ಮನೋವೇದನೆ- ಚೆನ್ನನ ಹೃದಯ ಭಾರ. ಕಣ್ಣೀರನ್ನು ಹನಿಸುವ ಒಡೆಯನ ದುಃಖವನ್ನರಿತ ಕಂಥಕ! ಇವುಗಳೊಂದಿಗೆ ಪುರೋದ್ಯಾನದ ಸಿರಿಯೂ ಕುಂದಿ ರಥವು ಉತ್ತರಪಾರ್ಶ್ವದ ಬೀದಿಯನ್ನೇರಿದೆ.

(ಮೌನವಾದ ರಥಗಮನದಲ್ಲಿ- ದೂರದಿಂದೊಂದು ಆರ್ತಧ್ವನಿಯು- ಹೆಂಗುಸು- ಮಕ್ಕಳ ಕೂಗು- ಕೇಳಿಸುವುದು.)

ಸಿದ್ಧಾರ್ಥ: (ತಟಕ್ಕನೆ ಎಚ್ಚರ ಹೊಂದಿದಂತೆ) ಹಾಯ್, ಅದೇನಾ ನೂತನವಾದೊಂದು ಶಬ್ದ! ನಾನು ಇಂದಿನ ವರೆಗೂ ಕೇಳಿರದ- ನನ್ನರಿವಿಗೆ ನಿಲುಕಿರದ — ಧ್ವನಿ ಯಾವುದೋ ಕೇಳಿಸುತ್ತಿದೆಯಲ್ಲ! ಚೆನ್ನ, ಚೆನ್ನ, ಕೇಳಿದೆಯಾ ಅದನ್ನು! ಅದೋ ನೋಡಲ್ಲಿ- ಅದೇನಾ ಜನಸಂದಣಿ! ಅದೇನ ವರ ಹೆಗಲಲ್ಲಿ! ಹೊರೆಯ ಹಿಂದಿನಿಂದಲೇ ಬಿದ್ದೆದ್ದು, ಕಣ್ಣೀರಿಳಿಸಿ- ಹೃದಯವನು ಮಿಾಟುವ ಶಬ್ದಗಳನ್ನುಚ್ಚರಿಸುತ್ತಿರುವರಲ್ಲ! ಏನದು?

ಚೆನ್ನ: ಒಡೆಯಾ- ನಾನೇನು ಹೇಳಲಿ? ಹೇಳುವುದೇನನು? ಪ್ರಭೋ, ಅತ್ತಕಡೆಗೆ ಕಣ್ಣು ಹೊರಳಿಸಬೇಡಿರಿ. ಪ್ರಭುಗಳದನ್ನು ನೋಡಬಾರದು. ನೋಡುವ ನೋಟವಲ್ಲವದು!

ಸಿದ್ಧಾರ್ಥ: ಚೆನ್ನಾ.... ಚೆನ್ನಾ.... ಕಣ್ಣೀರಿಳಿಸಿ- ಅದೇಕೆ ತಲೆತಗ್ಗಿಸಿದೆ? ನೋಡು, ನನ್ನೆಡೆಗೆ ನೋಡು........

ನಿರೂಪಕ: ನಿರುತ್ತರನಾದ ಚೆನ್ನ ದುಃಖಭಾರದಲ್ಲಿ ಕುಸಿದಿರಲು ತಲೆಯೆತ್ತುವುದೆಂತು? ಉತ್ತರವನ್ನೇನೆಂದೀಯಬೇಕು? ಆದರೆ- ಪ್ರಪಂಚದ ರುದ್ರದೃಶ್ಯಕ್ಕೆ ಮೊದಲಿಗನಾದ ಸಿದ್ಧಾರ್ಥನಿಗೆ ಸ್ಥೈರಣೆಯೆಲ್ಲಿದೆ? ಅದೋ, ರಥದಿಂದಳೇ ನೆಗೆದೋಡಿದ ರಾಜಕುಮಾರ ಭವ್ಯ ಛಾವಿಯು ನೆಲೆಗಾಗಿ ತಪಿಸಿದ ಮಹಾನುಭಾವ. ತಡೆದು ನಿಲ್ಲಿಸಿದುದಾರನ್ನು?....ಯಾರನ್ನು....?

ಸಿದ್ಧಾರ್ಥ: ಗೆಳೆಯರೇ, ಇದೇನೀ ಯಾತ್ರೆ? ಇದೇಕೀ ಬೆಂಕಿ?— ಅಯ್ಯೋ ಮಡಕೆ? ಇದೇನೀ ಹೊರೆ? ಬಳಿವಿಡಿದು ಬರುವ ಇವರಾಡುವುದೇನನ್ನು? ನನಗೊಂದೂ ತಿಳಿಯದ ಈ ವಿಚಾರವನ್ನು ತಿಳಿಸಿರಿ-

ಜನವೃಂದ: (ಬೆರಗು- ಭಯಗಳಿಂದ) ಅಯ್ಯೋ,- ರಾಜಕುಮಾರರೆ! ತಾವಿಲ್ಲಿ ಬರಲಾಗದು. ತಮ್ಮ ಪವಿತ್ರದೇಹವು ಅಶುದ್ಧವಾಗಬಾರದು. ನಮ್ಮನ್ನು ಮನ್ನಿಸಿರಿ.

ಸಿದ್ಧಾರ್ಥ: ಏನು? "ಪವಿತ್ರದೇಹವು.... ಅಶುದ್ಧ?" ಅಂದರೆ — ಅಂದರೆ....

(ಪುನಃ ರೋದನ)

ಸಿದ್ಧಾರ್ಥ: ಚೆನ್ನಾ— ಚೆನ್ನಾ....

ಚೆನ್ನ: (ರಥದಿಂದ ನೆಗೆದು- ಓಡಿಬಂದು) ಪ್ರಭುವರಾ, ಇದೇನೀ ವಿಚಾರ? ತಾವೇನನ್ನು ಮಾಡಿದಿರಿ? ನನಗರಿಯದೇನೇ ಬಂದುಬಿಟ್ಟಿರಲ್ಲಾ..? ಬನ್ನಿ—ಅರಮನೆಯ ಬಳಿ ಸೇರೋಣ. ಇನ್ನಿಲ್ಲಿ ತಡೆಯಬಾರದು.

ಸಿದ್ಧಾರ್ಥ: ತಡೆಯುವುದಿಲ್ಲ ಚೆನ್ನ! ನನ್ನರಿವಿಗೆ ನಿಲುಕದ ಈ ವಿಚಾರವನ್ನು ತಿಳಿಸದೆ—ನನ್ನ ಮೇಲೆ ಕವಿದಿರುವ ಈ ಸಮಸ್ಯೆಯನ್ನು ಬಿಡಿಸದೆ— ನನ್ನನ್ನು ಮುಂದೂಡುವೆಯಾ? ಬೇಡ- ಬೇಡ. ಅಗತ್ಯವಾಗಿ ತಿಳಿಸು. ಒಡೆಯನಾಣತಿಯನ್ನು ಮೀರುವೆಯಾ? ನಿನ್ನ ಸಹಭಾಗಿ— ಈ ದೀನನ ಯಾಚನೆಗೆ ಮನನೀಡೆಯಾ?

ಚೆನ್ನ: (ಕಣ್ಣೀರಿಳಿಸಿ) ಯುವರಾಜ, ಅದು ಕಾವು ಆರಿದ ದೇಹ. ಉಸಿರಾಟವು ತಡೆದು ನಿಂತ ದೇಹ. ಅದರಲ್ಲಿ ಕಳೆಯಿಲ್ಲ; ಚಲನೆಯಿಲ್ಲ; ದೃಷ್ಟಿಯಿಲ್ಲ. ಸಂಸಾರದಿಂದ ದೂರಹೋಗುವ ದೇಹವದು. ಅದು ನಿಷ್ಪ್ರಯೋಜಕವಾಗಿ ಸಾಗಿದರೂ— ಮಾಯಾಪಾಶದಿಂದ ಬಿಗಿದ ಅದರ ಸಂಸಾರವು ಕೂಗಿಡುತ್ತದೆ. ಆದರೂ ಮರಳಿಬಾರದ ಆ ದೇಹ, ಆ ತೇಜವುಳಿದ ಶರೀರ, ಸ್ಮಶಾನದ ಮೆಟ್ಟಿಲನ್ನೇರುತ್ತಿದೆ. ಇಷ್ಟೆ ಒಡೆಯ, ಇನ್ನು ಸಾಕು. ರಥವನ್ನೇರಿರಿ, ಕಣ್ಣೀರಿಳಿಸಬೇಡಿರಿ. ತಮ್ಮ ಮೃದುಹೃದಯವು ಹೀಗೆ ಕರಗಬಾರದು. ಬಡ ಚೆನ್ನನಿಂದದು ನೋಡಲಾಗದು. ಮನ್ನಿಸಿರಿ. ಈ ದುರ್ದಿನದ ಪಾಲಿಗೆ ನಾನು ಕಾರಣನಾಗಬೇಕಾಯಿತೇ? ಅಯ್ಯೋ!

ಸಿದ್ಧಾರ್ಥ: ಚೆನ್ನ, ಶರೀರವಿಡೀ ಬಿಸಿಯೇರುತ್ತಿದೆಯಲ್ಲಾ! ಈ ಅವಸ್ಥೆಯಿಂದ ಯಾರಿಗೂ ಬಿಡುಗಡೆಯಿಲ್ಲವೆ? ನನಗೂ—ಯಶೋಧರೆಗೂ—ಬಿಡುವಿರದೇ?

ಚೆನ್ನ: ಇಲ್ಲ ಪ್ರಭು, ಸಾವಿನಿಂದ ಯಾರೂ ತಪ್ಪಿಸಿಕೊಳ್ಳರು. ಜನನದಂತೆ ಮರಣವೆಂಬುದೂ ಮನುಷ್ಯನ— ಸಕಲ ಜೀವರಾಶಿಗಳ ಬಳಿವಿಡಿದು ಸಾಗುತ್ತಿದೆ.

ಸಿದ್ಧಾರ್ಥ: ಚೆನ್ನ, ಇದೋ ನನಗೆ ನಡುಕವಾಗುತ್ತಿದೆ ನನ್ನನಾಧರಿಸಿಕೊ. ಇನ್ನೀ ದೃಶ್ಯವನ್ನು ನೋಡಲಾರೆ— ತಡೆಯಲಾರೆ—ಅರಮನೆಯನ್ನು ಕುರಿತು ಸಾಗು ಚೆನ್ನ.

ಚೆನ್ನ: ಬನ್ನಿರಿ ನನ್ನೊಡೆಯ, ಕಣ್ಣೀರಿಡದಿರೆಂದು ಬೇಡುವೆನು. ಇದೋ, ಈ ದೀನನನ್ನು ಮನ್ನಿಸಿರಿ. ಈ ಬಡ ಚೆನ್ನನನ್ನಾಧರಿಸಿ ರಥವನ್ನೇರಿರಿ.

## ದೃಶ್ಯ ೨

ನಿರೂಪಕ: ಪುರಪ್ರಯಾಣವು ಕೊನೆಗೊಂಡ ಅದೇ ರಾತ್ರಿ! ಅರಮನೆಯ ವಾತಾವರಣವೆ ವಿಕ್ಷಿಪ್ತ ಕೋಲಾಹದಲ್ಲಿ ನೆಲೆನಿಂತಿದೆ. ಸಮಸ್ಯೆಗಳ ತಾಕಲಾಟದಲ್ಲಿ ತೊಳಲಾಡಿ, ಬೆಂದು ಬೇಗುದಿಗೊಂಡ ಸಿದ್ಧಾರ್ಥ ಅಂತಃಪುರದ ಶಯ್ಯಾಗಾರದಲ್ಲಿ ಪವಡಿಸಿದ್ದಾನೆ. ಬಳಿಯಲ್ಲೆ ನಿಶ್ಚಿಂತೆಯಿಂದ ಒರಗಿದ ಯಶೋಧರೆ. ಆದರೂ ಅದೇನಾ ಛಾಯೆಗಳು?

ಸಂಸಾರ: ಎಲವೋ ನೀನಾರು? ನಿನ್ನೀ ವೇಷವೇನು? ಕಾವಿಯುಡು ಗೆಯು ನಿನ್ನೀ ಹೇಯರೂಪವೇನು? ನನ್ನೀ ಗೃಹಾಂಗಣವನ್ನು—ನನ್ನೀವಾಸ ಗೃಹವನ್ನು ಯಾರ ಆಜ್ಞೆಯಿಂದ ಪ್ರವೇಶಿಸಿರುವೆ? ನಡೆ ದೂರ ಸರಿ!

ವಿರಕ್ತಿ: ತನ್ನರಿವನ್ನು ತಿಳಿಯದೆ, ಮೂಢನಂತೆ ವರ್ತಿಸುತ್ತಿರುವೆ ಯಲ್ಲಾ? ಪರಿಸ್ಥಿತಿಯನ್ನರಿಯದೆ ಇನ್ನೂ ನಿನ್ನೀ ಆಟೋಪವನ್ನು ಎತ್ತಿ ಹಿಡಿಯುತ್ತಿರುವೆಯಾ? ಈ ನಿನ್ನ ಶೃಂಗಾರ, ಈ ನಿನ್ನೀ ವಿಲಾಸ, ಇಂದೀ ಭವನದಿಂದ ಮಾಯಲು ಯತ್ನಿಸುತ್ತಿದೆ. ಕ್ಷಣಿಕವಾದ ನಿನ್ನೀ ವಿಭ್ರಮ-ವಿಲಾಸಗಳು ಈ ವಾಸಗೃಹವನ್ನು ಮುತ್ತಿಟ್ಟುಕೊಳ್ಳುವುದೆಂದೆಣಿಸುವೆಯಾ? ಬರಿಯ ಭ್ರಮೆಯಿದು

ಸಂಸಾರ: ಸುಖವಾಗಿ ಪವಡಿಸಿರುವ ನನ್ನೊಡೆಯನ ಶಾಂತಿಗೆ ಭಂಗ ವನ್ನು ನೀಡಬೇಡ. ದಾರಿತಪ್ಪಿ ಬಂದ ನೀನು, ನಿನ್ನ ನಿಜವಾದ ದಾರಿ ಯನ್ನು ಹಿಡಿ. ಇನ್ನೊಮ್ಮೆ ಈ ಮನೆಗೆ—ಈ ರಾಜ್ಯಗೃಹಕ್ಕೆಅಡಿಯಿರಿಸ ದಿರು. ಇಲ್ಲಿಯ ವೈಭವ-ಸುಖಸಂತತಿಗಳ ಮುಂದೆ ನಿನ್ನೀ ವೇಷವು ನನ್ನ ನೋಟವನ್ನೇ ನಾಚಿಸುತ್ತಿದೆ. ಅದೇ ಮಹಾದ್ವಾರದ ಬಳಿಯಿಂದಲೇ ಸಾಗು! ನಿನ್ನಂತಹವನಿಗೆ ಆ ದ್ವಾರವು ಸದಾ ತೆರವಾಗಿದೆ. ಶೀಘ್ರವಾಗಲಿ ಪ್ರಯಾಣ! ತಡೆಯದಿರು. ಅದೋ, ಮುಂದಡಿಯಿಡುವೆಯಾ?

ವಿರಕ್ತಿ: ಗೆಳೆಯಾ, ನನಗಾಗಿ ಈ ಉಪದೇಶ ನೀಡುವೆಯಾ? ಇಂದಿ ನಿಂದ ನನ್ನ ಪಾಲಿಗೊದಗುವ ಈ ಅನಂತ ಸುಖಪ್ರಾಪ್ತಿಯಲ್ಲಿ ನೊಂದು ಕೊಳ್ಳುವೆಯಾ? ಮತ್ಸರಿಸುವೆಯಾ? ಬೇಡ—ಬೇಡ............

ಸಂಸಾರ: (ಗಹಗಹಿಸಿ ನಕ್ಕು) ನಿನ್ನ ಪಾಲಿಗೊದಗುವ ಅನಂತ ಸುಖ! ಅದಾವ ಆಶೆಯನ್ನಿರಿಸಿ ಬಂದಿರುವಿ? ಈ ವೈಭವದ ಮುಂದೆ ಬರಲು ನಿನ್ನೀ ಬೋಳುತಲೆಗೆ ನಾಚಿಕೆಯೆನಿಸದೆ? ನಿನ್ನೀ ವಿಕೃತವೇಷಕ್ಕೆ ಈ ಗೃಹವೇ ನಗುವುದೆಂಬುದನ್ನು ನೆನೆಸಿ ಇನ್ನಾದರೂ ಸಾಗು....ಹಿಂದಿರುಗು.

ವಿರಕ್ತ: ಅಂದುಕೊ ಗೆಳೆಯಾ! ಏನೇನನ್ನು ಹೇಳಬೇಕೆಂದಿರುವೆಯೋ ಅದೆಲ್ಲವನ್ನೂ ಇಂದೇ ಹೇಳಿ ಮುಗಿಸಿ ಬಿಡು. ನಾಳೆಗೆಂದು ಉಳಿಸಬೇಡ! ನಾಳೆಯು ನಿನ್ನದಾಗದು.

ಸಂಸಾರ: ತಡೆ, ಮನಬಂದಂತೆ ಗಳಹಬೇಡ. ಕಾವೇರಿದ ಮೊದು ಳನ್ನು ಹೀಗೆ ಚೆಲ್ಲಾಡಬೇಡ.

ವಿರಕ್ತಿ: ಶಾಪ! ನೀನೆನ್ನುವ ಶಾಪು ನನ್ನ ಬಳಿಗದು ಬಾರದು. ಅವಿವೇಕದಿಂದ ಇಂದಿನ ವರೆಗೆ ನೀನು ಮೆಚ್ಚಿಟ್ಟ ವಿಲಾಸ-ವೈಭವಗಳು ಇಂದು ಯಾಥಾರ್ಥ್ಯವನ್ನು ಹೊರಗೆಡಹಿ, ಇದೇ ಗೃಹದಲ್ಲಿ ತಾಂಡವವಾಡುತ್ತಿವೆ. [redacted] ರುದ್ರತಾಂಡವದ ಕೊನೆಯು—ನಿನ್ನನ್ನು ಪುಡಿಗುಟ್ಟುವುದರಲ್ಲಿ ಪರಿಣಮಿಸಬಹುದೆಂಬುದನ್ನು ಇನ್ನೂ ನೀನರಿಯೆ! ಆಡಿಕೋ! ಮನಬಂದಂತೆ ನಲಿದಾಡಿಕೋ! ನಿನ್ನ ಅಜ್ಞಾನದ ಮುಂದೆ ನನಗೆ ನಾಚಿಕೆಯಾಗುವುದಿದ್ದರೂ—ಅದನ್ನು ತೋರಗೊಡದೆ—ನಿನ್ನನ್ನು—ಇಂದಿನ ವರೆಗೆ ಅನಂತ ಸುಖಗಳ ಸುಪ್ಪತ್ತಿಗೆಯಲ್ಲಿ ನೆಲೆನಿಂತ ನಿನ್ನನ್ನು—ಒಲುಮೆಯಿಂದ ಆರಾಧಿಸಿ, ನಿನ್ನ ಅಗಲಿಕೆಗಾಗಿ ನೋಯುತ್ತೇನೆ. ಉದ್ವೇಗಭರಿತನಾಗಿ ನೀನು ಆಡಿದ ಮಾತೆಲ್ಲವನ್ನೂ ಸಹಿಸಿಕೊಳ್ಳುವೆ.

ಸಂಸಾರ: ಇದೋ, [redacted] ಸುಖರಾತ್ರಿಯಲ್ಲಿ ಸುಖನಿದ್ರೆಯಲ್ಲಿ ಪವಡಿಸಿರುವ ನನ್ನ ಒಡೆಯನನ್ನು ಎಚ್ಚರಗೊಳಿಸಬೇಡ! ಇರಲಿ! ಇನ್ನು ನನ್ನ ವಿಚಾರ ಬೇಕೆಂದಾದರೆ—ಹಾಗೆಂದು ನಾನೆಣಿಸಿದರೆ—ಇದೋ, [redacted] ನಿಂತ ನಿಲುವಿನಲ್ಲೇ ನಿನ್ನನ್ನೂ—ನಿನ್ನ ಸಮಸ್ತ ಪರಿವಾರವನ್ನೂ ಈ ವಿಲಾಸಪಾಶದಿಂದ ಬಿಗಿದು ಸೆರೆಹಿಡಿದು ಕೆಡಹಬಲ್ಲೆ! ಆದರೆ, ಅದು ನನಗಿಂದು ಅವಶ್ಯವಿಲ್ಲ. ಅದರಿಂದ ಲಾಭವಿಲ್ಲ. ನಿಮ್ಮಂತಹ ವಿರಕ್ತರನ್ನು—ಈ ಸೋಗನ್ನು—ನಾನು ಸೆರೆಹಿಡಿದರೂ ನನಗದರಿಂದ ತೃಪ್ತಿ ಬಾರದು. ವ್ಯರ್ಥವಾಗಿ, ಸುಖಕ್ಕೆರವಾಗದ ಮಾತುಗಳನ್ನಾಡಿ ದಣಿಯಬೇಡ, ನನ್ನನ್ನೂ ದಣಿಸಬೇಡ.

ವಿರಕ್ತಿ: ದಣುವೇಕೆ? ನಾಳಿನಿಂದಲೆ ದೀರ್ಘವಿಶ್ರಾಂತಿಯನ್ನು ಕೈಗೊಳ್ಳಬೇಕಾದ ನಿನಗೆ ದಣುವೆಂತು ಬರಬಲ್ಲುದು? ಉದ್ರಿಕ್ತನಾಗದಿರು. ನಾಳಿನ ಮಹಾರಾತ್ರಿಯನ್ನು ಕಂಡು ನೀನೂ ಮುಂದಾಗಬೇಕು. ಅದನ್ನುಳಿದು—ಹೀಗಾಡಬೇಡ.

ಸಂಸಾರ: ವಿರಕ್ತಿ! ಮುಚ್ಚು ಬಾಯಿ. ಅಭದ್ರಗಳನ್ನಾಡಬೇಡ ಅಡಿಯ ಮುಂದಿರಿಸಿದರೆ....

ವಿರಕ್ತಿ:—ಏನು ಮಾಡುವೆ ನಿರ್ಬಲ ಸಂಸಾರವೆ! ನನಗಾಗಿ, ಇದೋ ಇಲ್ಲಿ ಪವಡಿಸಿರುವ ಆ ಆತ್ಮಸ್ವಾಗತವನ್ನು ಬಯಸುವಾಗ, ನಿನ್ನ ಅನುಮತಿಯ ಅಪೇಕ್ಷೆ ನನಗೇಕೆ? ಮುಂದಡಿಯಿಡುವ ನನಗೆ ತಡೆಯಾದರೂ ಹೇಗೆ—ಯಾರಿಂದ ಬರಬೇಕು? ಎಲ್ಲವೂ ನಿನ್ನ ಭ್ರಮೆ! ಭ್ರಮೆ!! ಭ್ರಮೆ!!!

ಸಂಸಾರ: ಅಭದ್ರವನ್ನಾಡಬೇಡ. ನಿನ್ನೊಡನೆ ಮಾತನಾಡುವುದೂ ಅಭದ್ರವೇ ಸರಿ!

ವಿರಕ್ತಿ: ಸರಿ. ನನ್ನೊಂದಿಗೆ ನಿನ್ನ ಸರಸ ನಡೆಯದು! ನಡೆದರೂ ಅದು ಅಭದ್ರ!

ಸಂಸಾರ: ತಡೆ, ತಡೆ ನಿಲ್ಲಕ್ಷಿ! ಅಭದ್ರವೇದಿಕೆಯನ್ನೇರುತ್ತಿರುವೆಯಾ? ಇನ್ನಿದೋ, ನಿನ್ನೀ ಆಟೋಪ ನನ್ನ ಪೂರ್ಣಶಕ್ತಿಯಲ್ಲಿ ಭಸ್ಮವಾಗದುಳಿಯದು.

ವಿರಕ್ತಿ: ಸಹಿಸುವೆನು! ನಿನ್ನ ಶಕ್ತಿಯ ಅರಿವು ನನಗಿದೆ. ಅದರ ಕಾವು ನನ್ನರಿವಿನಿಂದ ದೂರದಲ್ಲಿಲ್ಲ. ನಿನ್ನ ಹಿಂಸೆಗೆ ನನ್ನೀ ಹೃದಯ ಮೀಸಲಾಗಿದೆ!

ಸಂಸಾರ: ವಿರಕ್ತಿ, ವಿರಕ್ತಿ, ಸಾಗದಿರು. (ಉಚ್ಚಧ್ವನಿ.)

ವಿರಕ್ತಿ: ಮುಕ್ತಿ, ಮುಕ್ತಿ, ಮುಕ್ತಿಗಾಗಿ ಸಾಗುವೆ! ದೂರಸರಿ!

(ಒಂದು ಉದ್ವೇಗಪೂರ್ಣ ವಾದ್ಯಧ್ವನಿ.)

ಸಿದ್ಧಾರ್ಥ: (ತಟ್ಟನೆ ಎದ್ದು) ಮುಕ್ತಿ, ಮುಕ್ತಿ, ಮುಕ್ತಿ!!! ಅದುವೆ ಬೇಕು. ಅದುವೆ ಲೋಕಕಲ್ಯಾಣವನ್ನು ಒದಗಿಸುವ ಅಕ್ಷಯ ಪಾತ್ರೆ! ಇದೋ ಬರುವೆ.... ಬಂದೆ.... ಹಾಂ-ಇದೇನು? ಯಾರೂ ಕಾಣಿಸರಲ್ಲ! ಏನೀ ಚಿತ್ತಭ್ರಮೆ! ಆದರೂ—ಪ್ರಪಂಚದ ಕಷ್ಟಗಳಿಂದ ಸಂಸಾರವನ್ನು ಪಾರುಮಾಡಲು ■ 'ಮುಕ್ತಿ' ಧ್ವನಿಯು ಎಷ್ಟು ಶಕ್ತಿಪೂರ್ಣವಾಗಿದೆ! ಅದರಲ್ಲೆಷ್ಟು ಒಲವಿದೆ....

ಯಶೋಧರೆ: (ಎಚ್ಚತ್ತು) ಪ್ರಿಯತಮ, ಎಲ್ಲಿರುವಿರಿ? ಅದೇನನ್ನು ಆಡುತ್ತಿರುವಿರಿ! ಪುರಪ್ರಯಾಣದ ಬಳಿಕಲೇ ಸ್ವಚ್ಛವಾಗಿರದ ತಾವು, ಅದೇನನ್ನು ಗುಪ್ತವಾಗಿ ನೆನೆ-ನೆನೆದು ನೊಂದುಕೊಳ್ಳುವಿರಿ? ನನ್ನಲ್ಲಿ ಹೇಳಲಾಗದೆ? ಸಹಭಾಗಿನಿಯಾದ ನಾನೂ ತಮ್ಮೊಡನೆ ಬಾರದಿರುವ ನೋವಾದರೆ, ಇದೋ ಈ ನಿರ್ಭಾಗ್ಯಳನ್ನು ಕ್ಷಮಿಸಿರಿ.... ಅಯ್ಯೋ, ಅದೇಕೆ ಮಾತಾಡಲೊಲ್ಲಿರಿ? ಶೂನ್ಯವಾಗಿ ಅದೇನನ್ನು ನಿಟ್ಟಿಸುತ್ತಿರುವಿರಿ? ಮನ್ನಿಸಿರಿ. ನನಗಾಗಿ —ನಿಮ್ಮ ನಲ್ಲೆಗಾಗಿ—ಒಂದು ಉಸಿರನ್ನಾದರೂ ಕರುಣಿಸಿರಿ. ನನಗದು ಆಶ್ವಾಸನೆಯ ಪರಮಾವಧಿ! ದಯವಿರಿಸಿ ಹೇಳಿರಿ. ಯಾರನ್ನು ಹುಡುಕುತ್ತಲಿರುವಿರಿ?

ಸಿದ್ಧಾರ್ಥ: ನೊಂದುಕೊಳ್ಳಬೇಡ ಯಶೋಧರಾ; ಸುಶೀಲೆಯಾದ ನಿನ್ನಲ್ಲಿ ಬೇಸರಗೊಳ್ಳಲು ಅದೇನವಕಾಶವಿದೆ? ಸದ್ಗುಣಸಂಪನ್ನೆಯಾದ ನೀನು ನನ್ನನ್ನು ನೆರಳಿನಂತೆ ಅನುಸರಿಸುತ್ತಿರಲು ಒಂದಿನಿತಾದರೂ ಬೇಸರಕ್ಕೆ ಎಡೆಯೆಲ್ಲಿದೆ ಪ್ರಿಯೆ? ತಳಮಳಗೊಳ್ಳಬೇಡ. ಸುಖವಾಗಿ ಶಯನಿಸು. ತುಂಬುಗರ್ಭಿಣಿಯಾದ ನೀನು ನೊಂದುಕೊಳ್ಳಬಾರದು.... ನೋಡು, ಅದೇಕೆ ನಿಟ್ಟುಸಿರು ಬಿಡುತ್ತಿರುವೆ? ನನ್ನ ಮಾತಿನಲ್ಲಿ ವಿಶ್ವಾಸ ವಿರಿಸು. ನಿನ್ನಲ್ಲಿ ಈ ನಿಮಿಷದೊಡನೆ ಅನಸ್ಯೂತವಾಗಿ ಹರಿದುಬಂದ ನೂರಾರು ನಿಮಿಷಗಳಲ್ಲೂ ಒಂದು ಹನಿಯಷ್ಟಾದರೂ ಬೇಸರಗೊಂಡಿಲ್ಲ ವೆಂದೆನ್ನುವ ಈ ಮಾತನ್ನು ನಿನ್ನೆದೆಯಲ್ಲಿ ಅಚ್ಚೊತ್ತಿಕೊ!

ಯಶೋಧರೆ: ಪ್ರಾಣನಾಥ—ಹಾಗಾದರೆ ಎದೆಗುಂದಿಗೆ ಕಾರಣವೇನು? ನನ್ನಲ್ಲಿ ಸುರಲಾಗದ ಬೇನೆ-ಬೇಸರಿಕೆಗಳಿವೆಯೆ!

ಸಿದ್ಧಾರ್ಥ: ಇಲ್ಲ ಪ್ರಿಯೆ, ಗಹನವಾದೊಂದು ಯೋಚನೆಯಲ್ಲಿ ಮಗ್ನ ವಾಗಿದ್ದ ನನ್ನ ಮನಸ್ಸು, ಬಿಡುವಿರದ ವಿಮರ್ಶೆಯಿಂದ ಬಳಲಿ ಆವುದೋ ಒಂದು ದುಃಸ್ವಪ್ನದಲ್ಲಿ ತೊಳಲಾಡಿತು. ಅಲ್ಲಿಯೇ ಎಚ್ಚರಹೊಂದಿದ ನಾನು, ವಾಸ್ತವ ಸನ್ನಿವೇಶದ ಘಟನೆಯಲ್ಲಿ ಹುಡುಕಾಡಿದೆನು. ಇಂತಹ ಸನ್ನಿವೇಶಕ್ಕೆ ಈ ದಿನವು ನೂತನವಾದುದರಿಂದಲೇ ವಿಕ್ಷಿಪ್ತನಾದೆನಲ್ಲದೆ— ಇದಾವ ಬಗೆಯು ನಿನ್ನ ಅಧೈರ್ಯಕ್ಕೆ ದುಃಖೋದ್ವೇಗಕ್ಕೆ ಎಡವಾಗದು. ಸ್ವಸ್ಥಚಿತ್ತಳಾಗಿರು. ಕಲ್ಯಾಣಗುಣಸಂಪನ್ನ ಪುತ್ರಜನನದ—ಅಮಂಗಲ ನಿಮೇಷವನ್ನು ಆನಂದದಿಂದ ಕಾಯು! ನೆಮ್ಮದಿಯನ್ನೈದುವೆ.

ಯಶೋಧರೆ: ನೀವೂ ಮಲಗಿಕೊಳ್ಳಿರಿ! ಗಾಯಕಿಯರನ್ನು ಬರ ಹೇಳಲೆ? ಉದ್ವೇಗವು ಕಡಿಮೆಯಾಗುವುದು. ನೆಮ್ಮದಿಯನ್ನೈದಿ ಸುಖ ನಿದ್ರೆ ಬರುವುದು. ಕರೆಯಲೇ?

ಸಿದ್ಧಾರ್ಥ: ಪ್ರಿಯೆ, ಬೇಡ. ಈ ಪರಿಸ್ಥಿತಿಯಲ್ಲಾವುದೂ ಬೇಡ. ನನ್ನ ಸುಖಕ್ಕೆ ಯಾವ ತೆರನಾದ ಧಕ್ಕೆಯೂ ಬಂದಿಲ್ಲ. ನೀನೇನೂ ಚಿಂತಿಸ ಬೇಡ. ಇದೋ, ಮಲಗಿಕೊಳ್ಳುವೆ!

ಯಶೋಧರೆ: ಧನ್ಯಳಾದೆ, ತಮ್ಮ ಪಾದಸೇವೆಯ ಭಾಗ್ಯವು ಸದಾ ನನಗಿರುವಂತೆ ದೇವರನುಗ್ರಹಿಸಲಿ! ಆ ಭಾಗ್ಯವೇ ನನಗೊದಗಿದರೆ ಸಾಕು. ಮಲಗಿಕೊಳ್ಳಿರಿ.

(ಉದ್ವೇಗಭರಿತವಾದ ವಾದ್ಯರವವೊಂದು ಮೆಲುವಾಗಿ ಕೇಳಿಸಿ, ಮೌನವಾಗುವುದು.)

## ದೃಶ್ಯ ೩

ನಿರೂಪಕ: ಯಶೋಧರಾಮಾತೆ ಸುಪುತ್ರನಿಗೆ ಜನನವಿತ್ತ ದಿನ. ರಾಜಗೃಹವಿಡೀ ಆನಂದಕೋಲಾಹಲದಲ್ಲಿ ತೇಲಾಡುತ್ತಿದ್ದ ದಿನ. ಆರಾತ್ರಿ ಚೆನ್ನ ದಿನದ ಸಂಭ್ರಮದಿಂದ ದಣಿದು ಒರಗಿದ್ದಾನೆ. ಆದರೆ ಆ ನಿಶೀಥದಲ್ಲಿ ರಾಜಗೃಹವಿಡೀ ಸುಖನಿದ್ರೆಯಲ್ಲಿರುವ ಕಾಲದಲ್ಲಿ ಅದಾರು ಚೆನ್ನನನ್ನು ಮೆಲುದನಿಯಿಂದ ಕೂಗಿಡುವರು?....

ಸಿದ್ಧಾರ್ಥ: ಚೆನ್ನಾ—ಚೆನ್ನಾ—

ಚೆನ್ನ: ಯಾರದು? (ಬಾಗಿಲು ತೆರೆವ ಸದ್ದು) ಮಹಾಪ್ರಭೋ, ತಾವಿಲ್ಲಿ? ಯಾಕಾಗಿ ಬಂದಿರಿ ನನ್ನ ದೊರೆ? ಈ ಬಡವನಿಂದ ಏನು ಸೇವೆ ಯಾಗಬೇಕು?

ಸಿದ್ಧಾರ್ಥ: ಚೆನ್ನಾ, ನಿನ್ನಿಂದಾಗತಕ್ಕ ಸೇವೆಯೊಂದಿದೆ. ಈ ಸೇವೆ ಯಿಂದ ನೀನು ಪ್ರಪಂಚದ ಮಹಾಸೇವೆಯೊಂದನ್ನು ಮಾಡಿದಷ್ಟು ಕೃತ ಕೃತ್ಯನಾಗುವೆ!

ಚೆನ್ನ: ಅದಾವುದು ಪ್ರಭೊ! ಇಂದಿನ ಈ ಸಂತೋಷದಲ್ಲಿ ತಮ್ಮ ಸೇವೆಯುಹ್ನುಳಿದು ಬೇರೊಂದು ಭಾಗ್ಯವೇನಿದೆ ನನ್ನೊಡೆಯಾ? ಅಜ್ಞಾಪಿಸಿರಿ!

ಸಿದ್ಧಾರ್ಥ: ಚೆನ್ನ, ನನ್ನ ಮಾತುಗಳಿಂದ ಉದ್ವೇಗಪಡಬೇಡ. ನೊಂದು ಕೊಳ್ಳಬೇಡ.

ಚೆನ್ನ: ಎಂತಹ ಪರಿಸ್ಥಿತಿಯು ಬಂದರೂ ತಡೆದುಕೊಳ್ಳಬಲ್ಲೆ. ಆದರೆ ನನ್ನೊಡೆಯನಿಗೆ ಯಾವ ಬಗೆಯ ಕೇಡೂ ಉಂಟಾಗದಿದ್ದರೆ ಸಾಕು.

ಸಿದ್ಧಾರ್ಥ: ಚೆನ್ನ, ನಿನ್ನ ಹೃದಯವು ಎಷ್ಟು ಸರಲವಾಗಿದೆ! ನಿಷ್ಕಾಮ ವೃತ್ತಿಯ ನನ್ನ ಗೆಳೆಯಾ, ನನಗಾಗಿ ಒಂದು ಉಪಕಾರವನ್ನು ಮಾಡು. ಚೆನ್ನಾ—

ಚೆನ್ನ: ಏನು ನನ್ನೊಡೆಯಾ?

ಸಿದ್ಧಾರ್ಥ: ಚೆನ್ನ, ಇಂದು ಚೈತ್ರಮಾಸದ ಪೂರ್ಣಿಮಾ ರಾತ್ರಿ! ಇದೊಂದು ಮಹಾರಾತ್ರಿ! ವಿಶ್ವವಿಡೀ ಈ ಬೆಳ್ದಿಂಗಳ ಛಾಯೆಯಲ್ಲಿ ಎಲ್ಲ

ವನ್ನೂ ಮರೆತು ಸುಖವಾಗಿ ಒರಗಿದೆ. ಈ ಸುಖವನ್ನು ಅಮಾವಾಸ್ಯೆಯ ಕಗ್ಗತ್ತಲೆಯಲ್ಲಿ ಬೀಳಗೊಡದಂತೆ ಮಾಡುವ ಯತ್ನಕ್ಕಾಗಿ ನಾನಿಂದು ತೆರಳಲಿರುವೆ!

ಚೆನ್ನ: ಅಯ್ಯೋ, ಅದೇನು ನನ್ನೊಡೆಯ ಹಾಗೆಂದರೆ—? ದೇವರೇ ಎಲ್ಲಿಗೆ ತೆರಳಲಿರುವಿರಿ? ಬೇಡ ಪ್ರಭೊ! ಈ ದೀನನ ಜೀವಿತಕ್ಕೆ ಆಧಾರ ವಾದ ಭಾವೀರಾಜ್ಯದ ಚಕ್ರವರ್ತಿಯಾದ ತಾವು....ಅಯ್ಯೋ ಬೇಡ ಬೇಡ!

ಸಿದ್ಧಾರ್ಥ: ಚೆನ್ನ, ನೀನು ದೀನನಾಗಲಾರೆ! ವಿಶ್ವೋಪಕಾರಿಯಾ ಗುವೆ. ಮರುಗಬೇಡ. ಈ ಅಪಾರವಾದ ದುಃಖರಾಶಿಯಲ್ಲಿ ಬೇಯು ತ್ತಿರುವ ಜನರ ದುಃಖನಿವಾರಣೆಗಾಗಿ ಹೊರಟಿರುವ ನನ್ನನ್ನು—ನೀನ..... ನನ್ನ ಚೆನ್ನ ಆನಂದೋದ್ರೇಕದಿಂದ ಅಗಲಬೇಕಾದಾಗ—ಅದನ್ನರಿಯದೆ ಮರುಗುವೆಯಾ? ಪ್ರಪಂಚದ ದುಃಖರಾಶಿಗಳ ಮೊತ್ತವನ್ನು ತೋರಿಸಿ ಉಪದೇಶಿಸಿದ ನೀನೂ ನನ್ನ ಬಂಧುವು!

ಚೆನ್ನ: ಅದರ ಪರಿಣಾಮವು ಹೀಗಾಗಬಹುದೆಂದರಿತಿದ್ದರೆ--ಈ ಬಡವ ನಿಂದ ಆ ಮಹಾಪರಾಧವಾಗುತ್ತಿರಲಿಲ್ಲ. ತಮ್ಮ ಕಣ್ಣೀರನ್ನು ಕಂಡ ಮಹಾಪಾಪಿ ನಾನು!

ಸಿದ್ಧಾರ್ಥ: ಹಾಗೆನ್ನದಿರು ಚೆನ್ನ! ನೀನು ಪಾಪಿಯಲ್ಲ. ಪ್ರಪಂಚದ ಸೇವೆಯನ್ನು ನನ್ನಿಂದ ಮಾಡಿಸಲು ಅದಕ್ಕಾಗಿ ಹೆಬ್ಬಾಗಿಲನ್ನು ತೆರೆದು ತೋರಿದ ನನ್ನ ಗುರು ನೀನ!

ಚೆನ್ನ: ಅಯ್ಯೋ, ಈ ನಿರ್ಭಾಗ್ಯನು ಏನು ಮಾಡಿದನು? ನನ್ನೊ ಡೆಯಾ, ಹೀಗಾದರೆ ರಾಣಿಯವರು, ತಮ್ಮ ಭಾಗ್ಯಪುತ್ರನು.... ಪ್ರಭೋ ಇವರ ಗತಿಯೇನು?

ಸಿದ್ಧಾರ್ಥ: ಚೆನ್ನ—ಯಾರಿಗಾಗಿ ಯಾರಿರುವರು? ನೀನೇ ಯೋ ಚಿಸು! ನಾವು ಕಂಡ ಸತ್ಯವೇನು? ಆ ಸತ್ಯದರಿವಿನಲ್ಲೂ ನೀನಾಡುವ ಈ ಮಾತೇನು?

ಚೆನ್ನ: ಪ್ರಭೋ, ಈ ಬಡವನಿಗೆ ಏನೂ ತೋರದು! ತಾವು ಯಾರನ್ನೂ ಏನನ್ನೂ ಬಿಟ್ಟು ಅಗಲಬಾರದು. ಅಷ್ಟಾದರೆ ಸಾಕು ಇದೋ.... ಇದೋ....

ಸಿದ್ಧಾರ್ಥ: ಚೆನ್ನಾ—ಅದೇಕೆ ಕಣ್ಣೀರಿಳಿಸುವೆ? ಎದ್ದೇಳು! ನನ್ನ ಪಾದಗಳನ್ನು ಅದೇಕೆ ಕಣ್ಣೀರಿನಿಂದ ತೋಯಿಸುತ್ತಿರುವೆ? ಹಾಗಾಗ ಬಾರದು! ನೋಡು. ನನ್ನನ್ನು ನೋಡು. ನನಗಾಗಿ—ಲೋಕಕ್ಕಾಗಿ—ಒಂದು ಉಪಕಾರವನ್ನು ಮಾಡು.

ಚೆನ್ನ: ಏನಾಗಬೇಕು ನನ್ನೊಡೆಯಾ?. ನನ್ನ ನಾಲಗೆಯೇ ತಡವರಿಸುತ್ತಿದೆ!

ಸಿದ್ಧಾರ್ಥ: ಚೆನ್ನಾ, ಇದೋ ವಿಶಾಲಜಗತ್ತನ್ನು ನೋಡು. ಹುಟ್ಟು—ಸಾವುಗಳ ಆರ್ತಧ್ವನಿಯು, ಚೀರಾಟದ, ಕಣ್ಣೀರ ಕೋಡಿಯ ದುರಂತಗಳನ್ನು ನೋಡು. ಇದೆಲ್ಲವನ್ನು ಕಂಡೂ—ಇನ್ನೂ ಇದರಲ್ಲಿ ತೊಳಲಾಡಿ ಉರುಳಾಡಿ ನವೆಯಬೇಕೇ? ಈ ಕಷ್ಟದಿಂದ ಜನರು ಪಾರಾಗಲು ಸಾಧ್ಯವಿಲ್ಲವೇಕೆ ಚೆನ್ನಾ! ಹೇಳು. ಹೇಳು.

ಚೆನ್ನ: ಒಡೆಯಾ, ನನಗೇನೂ ತೋಚದು. ಅಷ್ಟು ಪ್ರಬುದ್ಧವಾಗಿರದ ಹೃದಯವಿದು. ಮನ್ನಿಸಿರಿ.

ಸಿದ್ಧಾರ್ಥ: ಚೆನ್ನ, ಸಾಧ್ಯವಿದೆ. ನಿನ್ನೊಲವಿದ್ದರೆ ಸಾಧ್ಯವಿದೆ. ಈ ಬೆಳುದಿಂಗಳು ಶಾಶ್ವತವಾಗಿರಲು ಸಾಧ್ಯವಿದೆ.

ಚೆನ್ನ: ಹೇಗೆ, ನನ್ನೊಡೆಯಾ?

ಸಿದ್ಧಾರ್ಥ: ಅದಕ್ಕಾಗಿಯೆ ಮುಂದಡಿಯಿಡುವೆ. ಇನ್ನು ಕೊರಗಬೇಡ; ನೋಯಬೇಡ. ಇಂದಿನ ದಿನಕ್ಕಿಂತ ಹಿರಿದು ನಾಳೆಯಲ್ಲ. ನಾಳೆಗೆಂದರೆ ಅದು ಹಲವಾರು ಬಯಕೆಗಳಲ್ಲಿ ಸಿಲುಕಿ ನೂರಾರು ನಾಳೆಗಳ ಕಂತೆಯಾಗಿ ಕಡಿದಿಕ್ಕಲು ಕಷ್ಟವಾಗುವುದು. ಚೆನ್ನ!

ಚೆನ್ನ: ನನ್ನೊಡೆಯಾ....

ಸಿದ್ಧಾರ್ಥ: ಶಾಂತಿಯಿಂದಿರು. ಯಾರಲ್ಲಿಯೂ ಏನನ್ನೂ ಉಸುರಬೇಡ. ಈ ರಾತ್ರಿಯ ಮೂರನೆಯ ಯಾಮದ ಕಾಲದಲ್ಲಿ ನನಗಾಗಿ ನೀನೂ ಕಂಥಕನೂ ಅರಮನೆಯ ಹೆಬ್ಬಾಗಿಲಲ್ಲಿ ಕಾದಿರ್ರಿ. ವಿಶ್ವದ ಸೇವಾಭಾಗ್ಯವನ್ನು ಪಡೆಯಲು ಹೊರಟ ನನಗಾಗಿ—ಕಾದಿರಿ! ನಾನು ಅದೇ ವೇಳೆಯಲ್ಲಿ ಬರುವೆನು. ವಿಶ್ವದ ದುಃಖಸಂತತಿಯನ್ನು ನಿರ್ಮೂಲಗೊಳಿಸಲು ಹೊರಟು ಬರುವೆನು....ಚೆನ್ನಾ, ಅದೇನು ಮೌನವಾಗಿರುವೆ?

ಚೆನ್ನ: ಇನ್ನೇನು ಮಾಡಬೇಕು ನನ್ನೊಡೆಯಾ? [redacted] ನಿರ್ಭಾಗ್ಯನು ಇನ್ನೇನನ್ನ ಕೇಳಬೇಕು ನನ್ನೊಡೆಯಾ? "ಅಗಲುವೆನು" ಎಂಬ ದುಃಖ ಭರಿತ ವಚನವನ್ನು ಕೇಳಬೇಕೇ?

ಸಿದ್ಧಾರ್ಥ। ಚೆನ್ನ—ಈ ಅಗಲಿಕೆಯ ಬೇನೆಯನ್ನು ತಡೆಹಿಡಿ! ನಾನು ಕಠೋರಹೃದಯನಲ್ಲ! ಪ್ರೇಮವನ್ನರಿಯದವನಲ್ಲ. ಅಮರ ಪ್ರೇಮಕ್ಕಾಗಿ, ಅದರ ಸಾಧನೆಗಾಗಿ ಹೊರಟಿರುವ ಒಬ್ಬ ಯಾತ್ರಿಕ. ಇದನ್ನು ನೆನೆಯು! ನಿನ್ನ ಸೇವೆಯನ್ನು ಮಾಡು... ಶುಭದ ಹಾರೈಕೆಯಲ್ಲಿರು!

ಚೆನ್ನ: ಅಪ್ಪಣೆ ಪ್ರಭೊ!

ಸಿದ್ಧಾರ್ಥ: ಚೆನ್ನ, ನಾನಿನ್ನು ಬರಲೇ? ತುಸುಹೊತ್ತು ಸುಖವಾಗಿ ಪವಡಿಸು! ನಾನು ಹೇಳಿದ ವೇಳೆಯಲ್ಲಿ ಕಾದಿರಲು ಮಾತ್ರ ಮರೆಯಬೇಡ. ನೀವಿಬ್ಬರೂ ನನ್ನ ಆತ್ಮೀಯರು! ನಿಮಗರಿಯದೆ ನನ್ನ ಅಗಲಿಕೆಗೆ ಪೂರ್ಣತೆಯಿಲ್ಲ. ಚೆನ್ನ, ಸುಖವಾಗಿ ಪವಡಿಸು!

ನಿರೂಪಕ:— ಚೆನ್ನನಿಗೆಲ್ಲಿದೆ ಸುಖನಿದ್ರೆ! ಜೀವನಾಧಾರಸ್ವಾಮಿಯ ಅಗಲಿಕೆಯನ್ನು [redacted] ಬಡ ಜೀವವೆಂತು ಸೈರಿಸಬಲ್ಲುದು? ಆದರೂ ಒಡೆಯನಿಗಾಗಿ ಅಲ್ಲೇ ಕುಸಿದೊರಗಿದ್ದಾನೆ.

## ದೃಶ್ಯ ೪

(ಮೆಲುವಾದ ಗೀತಧ್ವನಿ. ರಾತ್ರಿಯ ಭೀಕರತೆಗೆರವಾಗುವಂತಿರಬೇಕು.)

ನಿರೂಪಕ: ಆ ರಾತ್ರಿಯ ಮೂರನೆಯ ಯಾಮದ ಪೂರ್ವಭಾವಿಯಾದ ಒಂದು ಕ್ಷಣ. ರಾಜಕುಮಾರ ಅಂತಃಪುರದ ಬಾಗಿಲೆಡೆಗೆ ಬಂದಿದ್ದಾನೆ.

ಸಿದ್ಧಾರ್ಥ: ಆಹಾ! ಎಲ್ಲರೂ ಸುಖನಿದ್ರೆಯಲ್ಲಿರುವರು. ಸುಖಸ್ವಪ್ನದಲ್ಲಿ ಮೈಮರೆತು ನಿದ್ದೆಯಲ್ಲಿದ್ದಾಳೆ ಯಶೋಧರೆ ದಣಿದು ಒರಗಿರುವರು ದಾಸಿಯರು. [redacted] ಪರಿಸ್ಥಿತಿಯಲ್ಲೂ ಆ ಎಳಮಗು ನಗುತ್ತಿದೆಯಲ್ಲಾ! ಯಾವ ಭಾಗ್ಯವನ್ನು ಕಂಡು? ನಿಷ್ಕಲ್ಮಷವಾದ ಆ ಎಳಗೂಸಿನ ಹೃದಯದಲ್ಲಿ ಭಾವಿಯ ಕಲ್ಯಾಣವು ಭಾಸವಾಗುತ್ತಿರಬಹುದು! ಮೆಲುವಾಗಿ ಯಶೋಧರೆಯನ್ನು ದನಿಗೂಡಿ ಎಚ್ಚರಿಸಿ ಬಿಡುವನ್ನು ತಿಳುಹಲೇ? ಮಗುವಿಗೊಂದು ಮುತ್ತಿಟ್ಟು ನನ್ನ ಕೊನೆಯ ಸಂದೇಶವನ್ನು ಕಿವಿಯಲ್ಲೂದಲೆ?

(ದೂರದಿಂದ ಒಂದು ಕರೆ ಕೇಳಿಸುವುದು.)

ಕರೆ: ಸಿದ್ಧಾರ್ಥ, ಸಿದ್ಧಾರ್ಥ........

ಸಿದ್ಧಾರ್ಥ: ಯಾರದು? ಯಾರದು?

ವಿರಕ್ತಿ: ನಾನು, ಯಾರೆಂಬುದನ್ನು ಇನ್ನೂ ನೀನರಿಯೆಯಾ? ನಿನ್ನನ್ನು ಎಂದಿಗೂ ಬಿಟ್ಟಗಲಲಾರದ ವಿರಕ್ತಿ! ಸಿದ್ಧಾರ್ಥ........

ಸಿದ್ಧಾರ್ಥ: ಏನಾಗಬೇಕು? ಆಜ್ಞಾಧೀನನಿರುವೆ!

ವಿರಕ್ತಿ: ಸಿದ್ಧಾರ್ಥ, ಎಚ್ಚರದಿಂದಿರು. ಈ ಪರಿಸ್ಥಿತಿಯಲ್ಲಿ ನೀನವರನ್ನು ಎಚ್ಚರಿಸಿದರೆ, ಭವದ ಬಂಧನದಲ್ಲಿ ತೊಡಕಿ ಕಷ್ಟಕ್ಕೀಡಾಗುವೆ. ಇಲ್ಲಿಂದಲೆ—ಮೌನಸಂದೇಶವನ್ನಿತ್ತು ನಿವೃತ್ತನಾಗು. ಅದು ಸಾಕು. ತಡೆಯಬೇಡ.

ಸಿದ್ಧಾರ್ಥ: ಸರಿ, ಸರಿ! ಇನ್ನು ತಡಮಾಡಬಾರದು. ಬರುವೆನು; ಬರುವೆನು. ನನಗಾಗಿ ಯಾರೂ ಕೊರಗಬೇಡಿರಿ. ನಿಮಗೆಲ್ಲ ಮಂಗಳವಾಗಲಿ.

## ದೃಶ್ಯ ೫

ನಿರೂಪಕ: ಅನುಮಾನದಿಯ ದಡ. ಕಂಥಕನನ್ನು ಆನಂದದಿಂದ ಚಪ್ಪರಿಸಿ—ಚೆನ್ನನ ಹೆಗಲಿಗೆ ಹೆಗಲನ್ನೊಡ್ಡಿ ಸಿದ್ಧಾರ್ಥ ನಿಚ್ಚಳವಾಗಿ ಹರಿವ ನದಿಯೆಡೆಗೆ—ನದಿಯಾಚೆಯ ವನದೆಡೆಗೆ— ನಿಟ್ಟಿಸುತ್ತಿದ್ದಾನೆ.

ಸಿದ್ಧಾರ್ಥ: ಚೆನ್ನ, ನಿನ್ನ ಸಹಾಯದಿಂದ ಲೋಕಕ್ಕೆ ಒಳ್ಳೆಯದಾಗಲಿ! ನಿನ್ನ ಪ್ರೀತಿಗಾಗಿ ಸದಾ ನಿನ್ನನ್ನು ನಾನು ಪ್ರೀತಿಸುತ್ತೇನೆ. ಕಂಥಕನನ್ನು ಕರೆದುಕೊಂಡು ಹೋಗು, ಇದೋ! ಈ ಆಭರಣಗಳನ್ನು-ಅಲಂಕರಿಸಲು ಬಾರದ ಇವುಗಳನ್ನು ಪಿತೃಪಾದರ ಚರಣದಲ್ಲಿ ಅರ್ಪಿಸು........ಕಂಥಕಾ, ಜನತೆಯ ಹಿತಕ್ಕಾಗಿ ನನ್ನನ್ನು ಹೊತ್ತುತಂದ ನಿನಗೆ ಅನಂತ ಧನ್ಯವಾದಗಳು. ಚೆನ್ನ, ಈ ಮುದ್ದು ಕಂಥಕನನ್ನು ನೋಯಿಸದೆ—ಬಳಲಿಸದೆ—ಸಾಕು.

ಚೆನ್ನ: ಆಗಲಿ ನನ್ನೊಡೆಯ! ಅಯ್ಯೊ, ನಿಮ್ಮನ್ನಗಲಿದ ತಂದೆ ಮತ್ತು ಪ್ರಜೆಗಳ ಕಷ್ಟವನ್ನೆಂತು ಕಾಣಲಿ! ಅಯ್ಯೊ, ಕೈಹಿಡಿದ ಮಡದಿ- ಆ ಮಗು —ಒಡೆಯಾ.......

ಸಿದ್ಧಾರ್ಥ: ಚೆನ್ನ—ನಶ್ವರವಾದೀ ಬಂಧುಪ್ರೀತಿಯನ್ನು ನೆನೆಯಬೇಡ. ಸಿಂಹಾಸನಕ್ಕಾಗಿ ನಾನು ಹುಟ್ಟಿಲ್ಲ ಈ ಅಮರವಾದ ರಾಜ್ಯಪ್ರಾಪ್ತಿಗಾಗಿ ಮುಂದಡಿಯಿಟ್ಟಿರುವೆ. ನೀನಿನ್ನು ಹೊರಡು. ಅದೊ ಬೆಳ್ಳಿಮೂಡಿತು. ಹೊರಡು!

ಚೆನ್ನ: ಪ್ರಭೋ, ಒಂದು ಅರಿಕೆ. ತಮ್ಮಸೇವಾಭಾಗ್ಯದಲ್ಲಿ ಈ ಬಡವನಿಗೂ ಒಂದು ಎಡೆಯನ್ನೀಯುವಿರಾ?

ಸಿದ್ಧಾರ್ಥ: ಈಯಬಹುದಿತ್ತು; ಆದರೆ ನೀನೀ ವಾರ್ತೆಯನ್ನು ಅರಮನೆಯಲ್ಲಿ ತಿಳಿಸದಿದ್ದರೆ ಅವರೇನೆಂದೆನ್ನುವರು? ಏನು ಮಾಡುವರು? ಯೋಚಿಸು. ಹುಡುಕಿ ಹುಡುಕಿ ವ್ಯಥೆಪಡುವರು. ಅದಾಗದು. ನೀನು ಹಿಂತಿರುಗು....ಕಂಥಕ, ಅದೇಕೆ ಜೋಲುಮೋರೆ ಮಾಡಿ ನನ್ನನ್ನು ನಿಟ್ಟಿಸುತ್ತಿರುವೆ? ಚೆನ್ನನೊಡನೆ ಸಾಗು. ನಿಮಗೆಲ್ಲರಿಗೂ ಮಂಗಳವಾಗಲಿ! ಇದೋ, ನಾನು ಬರುವೆ. ಚೆನ್ನ, ಸಾಗು ಗೆಳೆಯಾ! ಕಂಥಕ, ಚೆನ್ನನೊಡನಾಡಿಯಾಗಿ ಅಡಿಯಿಡು. ಓಂ—ಓಂ—ಓಂ............

ಚೆನ್ನ: ಪ್ರಭೋ, ಹೋಗಿಯೇ ಬಿಟ್ಟಿರಾ?

ರಾಗ—ಬೃಂದಾವನೀ ಸಾರಂಗ. ತಾಳ—ಕೆಹೆರವಾ.

ಪ್ರಭುವರಾ—ಕಾಣೇ—ಅನಾಥನಾದೇ
ಪೋದೆನೀನು—ದೇವಾ!
ಕೃಪಾದೃಷ್ಟಿ ನೀಡೋ!
ಸತ್ಯ ಶಾಂತಿ ತೇಜ—ಮೋದವೈ ಸಹಜ
ದಯಾಮಯ-ನೀನೆ-ಗತಿಯುಂಟೇನಿನ್ನು ॥ ಪ್ರಭುವರಾ ॥

ಪ್ರಭುವರಾ, ಇನ್ನು ಕಾಣಲಾರಿರಾ? ನನ್ನಗಲಿ ತೆರಳಿಯೇಬಿಟ್ಟಿರಾ? ಪ್ರಭೋ! ಬಟ್ಟಬಯಲಲ್ಲಿ ದಾರಿಗಾಗಿ ಮಿಡುಕಾಡುವ ಹಕ್ಕಿಯಂತೆ ನನ್ನನ್ನೀ ದುರ್ಗಮ ಸನ್ನಿವೇಶದಲ್ಲಿ ಸಿಲುಕಿಸಿ ತಾವು ಪಾರಾದಿರಾ?.... ಆಹೊ! ಕಂಥಕಾ, ನೀನೆಲ್ಲಿರುವೆ?........

....ಅಯ್ಯೋ! ಅದೇಕೆ ಅಲ್ಲಿ ಕುಸಿದಿರುವೆ? ಮಾತಾಡಲೊಲ್ಲೆಯೇಕೆ? ವಿಧಿಯೆ? ಕಂಥಕನನ್ನೇನು ಮಾಡಿದೆ? ಗೆಳೆಯಾ, ನೀನೂ ಹೊರಟುಹೋದೆಯಾ?.... ಇನ್ನೇನು? ದುರ್ವಿಧಿ ನನ್ನೊಬ್ಬನನ್ನು ಮಾತ್ರ ಉಳಿಸಿದೆ. ಆಗಲಿ!

ಒಡೆಯನ ಆಜ್ಞೆಯ ಪಾಲನೆಗಾಗಿ ಈ ದೇಹವನ್ನು ಹೊರಬೇಕು!....ಪ್ರಭೊ!
ನಿನಗಿದೋ ವಂದನೆ! ನನ್ನನ್ನನುಗ್ರಹಿಸು ಒಡೆಯಾ!!

## ದೃಶ್ಯ ೬

ನಿರೂಪಕ: ಸಿದ್ಧಾರ್ಥ ಸಂನ್ಯಾಸಿಯಾಗಿ ಗೌತಮನೆಂಬಭಿಧಾನದಿಂದ ಆರು ವರ್ಷಗಳ ಕಠಿಣ ತಪಸ್ಯೆಯಲ್ಲಿ ತೊಳಲಾಡಿ—ಪ್ರಾಪಂಚಿಕ ಬಂಧನಗಳನ್ನು ಕಳೆದು—ದುರಂತವಾದ ಅಗಲಿಕೆಯನ್ನು ಮರೆತು—ಮಾರನ ದುರ್ಭೇದ್ಯ ಪೀಡೆಗಳಿಂದ ವಿಮುಕ್ತಿಹೊಂದಿ—ಕೃಶನಾಗಿ, ಅದೊ! ಸುಜಾತೆಯಿತ್ತ ಅಮೃತಾನ್ನದಿಂದ ಚೇತನೋನ್ಮುಖನಾಗಿ ಜ್ಞಾನದೀಪದ ಪ್ರಕಾಶವನ್ನು ಬೋಧಿವೃಕ್ಷದಡಿಯಲ್ಲಿ ಕಂಡು ಆನಂದಿತನಾದನು. ಅದೊ—ಅದಾರು?

ಬುದ್ಧ: ಆಹಾ! ಏನೀ ಬೆಳಕು. ಎಂದಹ ಸುಪ್ರಭಾತವಿದು! ಏನು ಮಂಜುಲವಾದೀ ಪಕ್ಷಿಗಳ ಕಲರವ!

ರಾಗ—ಲಲಿತ. ತಾಳ—ಝಂಪ್.

ಶಾಂತಿಸುಧೆ ಸುರಿಯಿತೇ—ತಮವು ತುಂಬಿದ ಜಗದಿ ||
ಕಣ್ಣು ಮನ ತೆರೆಯಿತೇ—ಜೀವ ತೇಜಂ ಮಿನುಗಿ!
ಓ, ಬೆಳಕು! ಏಂ ಮಿನುಗು! ಕುಂದಿರದ ನವಜನುಮ!
ಭಾವಬೋಧಕ ಕಳೆಯು ಚೆಲ್ವ ಮನಕಾಯಿತೇ!
ಆವ ಮನದೇ ನಾನು ತೇಜ ಝರಿಯನು ನೋಡಿ
ಓಂ; ತತ್ತ್ವ, ಏಂ ಸತ್ಯ ಪಸರಿಸಿಹುದ್ಯೆ ಜ್ಯೋತಿ ||

ಬುದ್ಧ: (ಅವ್ಯಕ್ತ ಧ್ವನಿ) ....ಓಂ. ಶಾಂತಿ! ಶಾಂತಿ! ಶಾಂತಿ........ ಆನಂದಾ........ಆನಂದಾ........

ನಿರೂಪಕ: ಆ ಕೂಗು ಆನಂದನನ್ನು ಅರುವತ್ತು ವರ್ಷಗಳ ಹಿಂದಿನ ಅಗಲಿಕೆಯ ಗಂಭೀರದೃಶ್ಯದಿಂದ ಸೆಳೆದೊಯ್ದಿತು. ಆನಂದ-ವಿವಶನಾದ-ಅದೊ....!!

ಆನಂದ: ಗುರುದೇವ, ನನ್ನ ಅಜ್ಞಾನಕ್ಕಾಗಿ ಕ್ಷಮಿಸಿರಿ. ತಮ್ಮ ಅಗಲಿಕೆ-ಸಾಧನೆ-ತಪಸ್ಯೆಗಳ ಮುಂದೆ ನಾವು ಅಲ್ಪ! ನನ್ನನ್ನು ಅನುಗ್ರಹಿಸಿರಿ!

ಬುದ್ಧ: ಮರುಗಬೇಡ—ಕಂದಾ! ಇತ್ತ ನೋಡು. ಈ ದಿನ ವೈಶಾಖ ಪೂರ್ಣಿಮಾ. ಕುಜವಾರ. ಅದೇ ನಿಶೀಥದ ಅಂತಿಮ ಯಾಮ! ನಿಶ್ಶಬ್ದ-ನಿಶ್ಚೇಷ್ಟವಾದೀ ಪ್ರಕೃತಿ ನನ್ನೊಲವನ್ನು ಬಯಸುತ್ತಿದೆ. ಪೂರ್ಣ ಶಾಂತಿಗಾಗಿ ಈ ನಶ್ವರ ಕಳೇವರವನ್ನು ಬಿಡಬೇಕಾಗಿದೆ.

ಆನಂದ ಮತ್ತು ಸಾರಿಪುತ್ರ, ಮೌದ್ಗಲ್ಯಾಯನರು: ಗುರುದೇವ, ಇದೋ ಚರಣಗಳಲ್ಲಿ ಮಣಿದಿರುವೆವು. ನಮ್ಮನ್ನು ಪೂರ್ಣರನ್ನಾಗಿ ಮಾಡಿರಿ.

ಬುದ್ಧ: ಎದ್ದೇಳಿ-ಸುತ್ತಲಿರುವ ಈ ಸುಂದರಯಾಮದಲ್ಲಿ ನೆಲೆಗೊಂಡ ಪ್ರಕೃತಿಯನ್ನು ನೋಡಿರಿ! ನಿಮ್ಮೆದೆಯನ್ನು ಈ ನಿಷ್ಕಲ್ಮಷ ಶಾಂತಿಯಿಂದ ತುಂಬಿಕೊಳ್ಳಿರಿ! ಈ ಯಾಮದಲ್ಲೇ ನಾನು ಜೀವನದ ಬಂಧವನ್ನು ಹರಿದೊಗೆದು ಶಾಂತಿಯನ್ನು ಕಂಡಿದ್ದೇನೆ. ವಿಶಾಲ ವಿಶ್ವವೇ-ಬೆಳುದಿಂಗಳಂತಿರುವ ಸುಂದರ ಶಾಂತಿಯಲ್ಲಿ ನೆಲೆಗೊಂಡುದನ್ನು ಕಂಡಿದ್ದೇನೆ.

ಆನಂದ: ಅನುಗ್ರಹಿಸಿರಿ ಗುರುದೇವ—

ಬುದ್ಧ: ಯಾವುದಕ್ಕೆ ಹುಟ್ಟು, ಇರವು ಬೆಳವಿಯಿದೆಯೋ ಅದು ನಾಶಧರ್ಮಾತೀತವಲ್ಲ! ಈ ಸಂಸ್ಕಾರವೇ ವ್ಯಯಧರ್ಮ, ಅದುದರಿಂದ ಅದಕ್ಕಾಗಿ ಕೊರಗಬೇಡಿರಿ. ಅಹಿಂಸೆ-ಸತ್ಯಗಳೆಂಬ ಶ್ವಾಸಕೋಶಗಳಿಂದ ಉಸಿರಾಡಿಸಿರಿ. ಸತ್ಯವು ಜೀವನವನ್ನು ಬೆಳಗುವುದಾದರೆ ಅಹಿಂಸೆ ಪರಿವರ್ತನಗೊಳಿಸುವ ಮಾರ್ಗ. ನನ್ನ ಒಲವಿನ ಆನಂದ! ಅನಂತದಲ್ಲಿ ಲೀನವಾಗುವ ಈ ಆತ್ಮದರ್ಶನದ ಮಾರ್ಗವನ್ನೇರಿದಾಗ, ಭವಯಾತನೆಯಿಂದ ಉದ್ಧಾರಮಾಡಬಲ್ಲ ಮೃತ್ಯುವಿನ ಮುಂದೆ ನಿರಾಶನಾಗಿ—ಕಳಕಳಿಸಬೇಡ! ಆನಂದಾ-ನನ್ನೀ ನುಡಿಯನ್ನು ಕೇಳಿದೆಯಾ? ಬಳಿಯೆ ಬಾ! ಅತ್ತ ನೋಡು. ಅದೋ, ಪಶ್ಚಿಮ ನಿರಭ್ರಾಕಾಶದಲ್ಲಿ ದಿಂಗತಕ್ಕೆ ಕಾಲಿರಿಸುವ ಅಮೃತ ಕಿರಣನು ನಿನ್ನ ಹೃದಯಕ್ಕೆ ಶಾಂತಿಯೀಯಲಿ!

ಓಂ

ಶಾಂತಿಃ ಶಾಂತಿಃ ಶಾಂತಿಃ

(ಅದೇ ಪಡಿನುಡಿಯ ಶಾಂತಿವಚನದೊಂದಿಗೆ ನಿರ್ಯಾಣವು ನೆರವೇರುವುದು)



Edited, Printed & Published by K. V. Shenoy
at The Prabhat Printers, Ltd., Mangalore.